ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಆರ್ಥಿಕ ಇಲಾಖೆಯು ತಡೆ ನೀಡಿರುವ ಆದೇಶಗಳ ಕುರಿತು

ಶ್ರೀ ಎಂ. ಎ. ಗೋಪಾಲಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

456 (528) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯ ಸರ್ಕಾರದ ಅನೇಕ ಇಲಾಖೆಗಳು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಕಳೆದ ವರ್ಷ ನೀಡಿರುವ ಬಹುತೇಕ ಆಡಳಿತಾತ್ಮಕ ಅನುಮೋದನೆ/ಆದೇಶಗಳಿಗೆ ಆರ್ಥಿಕ ಇಲಾಖೆಯು ತಡೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಂಬಂಧ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು)

(ಆ) ಎಸ್. ಸಿ. ಪಿ/ಟಿ. ಎಸ್. ಪಿ. ಯೋಜನೆಗಳಡಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಪಡೆದಿರುವ ಆಡಳಿತಾತ್ಮಕ ಅನುಮೋದನೆ/ಆದೇಶಗಳಿಗೆ ಆರ್ಥಿಕ ಇಲಾಖೆಯು ತಡೆ ನೀಡಿದೆಯೇ; ನೀಡಿದ್ದಲ್ಲಿ, ಯಾವ ಯಾವ ಇಲಾಖೆಯ ಆದೇಶಗಳಿಗೆ ತಡೆ ನೀಡಲಾಗಿದೆ; ಈ ತಡೆ ಆದೇಶಗಳನ್ನು ಯಾವಾಗ ರದ್ದುಗೊಳಿಸಲಾಗುವುದು; (ವಿವರ ನೀಡುವುದು)

(ಇ) ಅನುದಾನಿತ ಶಾಲೆ ಮತ್ತು ಕಾಲೇಜುಗಳಲ್ಲಿ ಖಾಲಿ ಇರುವ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಆರ್ಥಿಕ ಇಲಾಖೆಯು ತಡೆ ನೀಡಿದೆಯೇ; ನೀಡಿದ್ದಲ್ಲಿ, ಈ ತಡೆ ಆದೇಶಗಳನ್ನು ಯಾವಾಗ ರದ್ದುಗೊಳಿಸಲಾಗುವುದು? (ವಿವರ ನೀಡುವುದು)